ಫೆಬ್ರವರಿ–2022

Wildlife Conservation Group

## ಲೇಖನಗಳು




**ವಿನ್ಯಾಸ**

ಧನರಾಜ್ ಎಂ.

**ಮುಖಪುಟ ಛಾಯಾಚಿತ್ರ**

ಹರೀಶ್ ಗೌಡ

**ಪರಿಷ್ಕರಣೆ**

ಮುರಳಿ ಎಸ್.

ಡಾ. ಮಧುಸೂಧನ ಹೆಚ್. ಸಿ.

**ಕರಡು ತಿದ್ದುಪಡಿ**

ಡಾ.ದೀಪಕ್ ಭ., ಮೈಸೂರು




# ಅರಳಿ ಮರ

**ಸಾಮಾನ್ಯ ಹೆಸರು:** **Peepal tree**

**ವೈಜ್ಞಾನಿಕ ಹೆಸರು:** ***Ficus religiosa***



© ಅಶ್ವಥ ಕೆ. ಎನ್. **ಅರಳಿ ಮರ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ**

ಅರಳಿಮರವು ಭಾರತದ ಹಿಂದೂ ಸಂಪ್ರದಾಯದಲ್ಲಿ ಶ್ರೇಷ್ಠ ಸ್ಥಾನವನ್ನು ಹೊಂದಿದೆ. ಸಾಮಾನ್ಯವಾಗಿ ಭಾರತ, ಶ್ರೀಲಂಕಾ ಮೊದಲಾದ ದೇಶಗಳಲ್ಲಿ ಕಂಡುಬರುವ ಮರವು ಸರಿಸುಮಾರು 900 ರಿಂದ 1500ವರ್ಷ ಬದುಕುತ್ತದೆ. ಮೊರೇಸಿ (Moraceae) ಕುಟುಂಬಕ್ಕೆ ಸೇರಿದ ಈ ಮರದ ವೈಜ್ಞಾನಿಕ ಹೆಸರು ಫೈಕಸ್ ರಿಲಿಜಿಯೋಸ (Ficus religiosa). ಭಾರತದಲ್ಲಿ ಅರಳಿ ಮರವನ್ನು ಅಶ್ವತ್ಥ ವೃಕ್ಷ ಎಂದೂ ಸಹ ಕರೆಯುತ್ತಾರೆ. ಸುಮಾರು 30 ಮೀಟರ್ ಎತ್ತರಕ್ಕೆ ಬೆಳೆಯುವ ಈ ಮರವು, ಬಾಲ್ಯದಲ್ಲಿ ಅಪ್ಪುಸಸ್ಯ (epiphyte) ವಾಗಿರುತ್ತದೆ. ಕ್ರಮೇಣ ತನ್ನ ಬೇರುಗಳನ್ನು ಭೂಮಿಯೊಳಗೆ ಭದ್ರಗೊಳಿಸಿ ಸ್ವತಂತ್ರ ಮರವಾಗಿ ಬೆಳೆಯುತ್ತದೆ. ಮರದ ತೊಗಟೆಯು ನಯವಾದ ಬೂದು ಬಣ್ಣದಿಂದ ಕೂಡಿರುತ್ತದೆ. ಅರಳಿ ಮರದ ಎಲೆಗಳು ಸರಳ ವಿನ್ಯಾಸವನ್ನು ಹೊಂದಿದ್ದು, ಗಾಢ ಹಸಿರು ಬಣ್ಣದಿಂದ ಕೂಡಿರುತ್ತವೆ. ಈ ಎಲೆಗಳು ಸುಮಾರು 10-20 ಸೆಂಟೀಮೀಟರ್ ನಷ್ಟು ಉದ್ದ, 7-15 ಸೆಂಟಿಮೀಟರ್ ನಷ್ಟು ಅಗಲವಿರುತ್ತದೆ. ಬಹುತೇಕ ಫೈಕಸ್ ಪ್ರಭೇದದ ಮರಗಳಲ್ಲಿ ಹೂಗಳು ಹಣ್ಣಿನ ಒಳಭಾಗದಲ್ಲಿ ಅಡಗಿ ಕುಳಿತಿರುತ್ತವೆ. ಇಂತಹ ರಚನೆಗೆ ಸೈಕೋನಿಯಂ (syconium) ಎನ್ನುತ್ತಾರೆ.

ಧಾರ್ಮಿಕವಾಗಿ ಹಿಂದೂ ಧರ್ಮದಲ್ಲಿ ಈ ಮರವನ್ನು ಪೂಜಿಸುತ್ತಾರೆ. ಆಯುರ್ವೇದದಲ್ಲಿ ಈ ಮರದ ಬಹುತೇಕ ಭಾಗಗಳನ್ನು ಉಪಯೋಗಿಸುತ್ತಾರೆ. ಮರದ ತೊಗಟೆಯನ್ನು ಬಾಯಿಹುಣ್ಣು, ಆಮಶಂಕೆ ಮೊದಲಾದ ಕಾಯಿಲೆಗಳಿಗೆ ಔಷಧಿಯಾಗಿ ಉಪಯೋಗಿಸಿದರೆ. ಎಲೆಯನ್ನು ಸುಟ್ಟಗಾಯಗಳಿಗೆ ಔಷಧವಾಗಿ ಉಪಯೋಗಿಸುತ್ತಾರೆ. ಹಿಂದಿನ ಕಾಲದಿಂದಲೂ ಈ ಅರಳಿ ಮರವನ್ನು ದೇವಸ್ಥಾನಗಳ ಬಳಿ, ಹೆದ್ದಾರಿಗಳಲ್ಲಿ ನೆರಳಿಗಾಗಿ ಬೆಳೆಸುವ ಪ್ರತೀತಿ ಇದೆ. ಹಾಗೂ ಹಳ್ಳಿಯ ಜನರು ಈ ಮರದ ಸೊಪ್ಪನ್ನು ಮೇಕೆ, ಕುರಿಗಳಿಗೆ ಮೇವಾಗಿಯೂ ಸಹ ಬಳಸುತ್ತಾರೆ...




# ಅಲೆಮಾರಿಯ ಅನುಭವಗಳು

ಈ ಬದುಕು, ನಿಂತಲ್ಲಿ ನಿಲ್ಲದ ನವ್ಯ ತುಡಿತಗಳ ಸರಪಳಿಗೆ ಸಿಕ್ಕ ಹೊಸ ಇಕ್ಕೆಲಗಳ ಸುಖಸಂಕಟವನ್ನು ಸರಾಗವಾಗಿ ಸರಿದೂಗಿಸಿಕೊಂಡು, ಅನಂತ ಅನುಭವಗಳನ್ನು ತನ್ನದೆ ತೆಕ್ಕೆಗೆ ಎಳೆದುಕೊಳ್ಳುತ್ತಾ ಒಂದೊಂದೇ ಹೆಜ್ಜೆ ಗುರುತುಗಳನ್ನು ಕಿತ್ತಿಟ್ಟು, ಅಗಣಿತ ಅಂತರವನ್ನು ಬಿಟ್ಟು ಜಾಗದಿಂದ ವಾಪಸ್ಸಾಗದೆ ಅದಮ್ಯ ಚೇತನ ಸೆಲೆಯ ಗಮ್ಯದೆಡೆಗೆ ಅಖಂಡವಾಗಿ ಕ್ರಮಿಸುತ್ತ, ಬಯಲ ಬೆಳಕಿಗೆ ಮೈಮುರಿದು ಏಕತಾನತೆಯಲಿ ತನ್ನನೇ ತಾನು ತನ್ನೊಳಗೆ ಗುನುಗಿಕೊಳ್ಳುತ್ತಾ, ಶರಧಿ ಬದುವಿನಗುಂಟ ಅಲೆಗಳೊಟ್ಟಿಗೆ ಅಲೆಯುತ್ತಾ, ಹೊಸ ಜಗತ್ತಿನೊಂದಿಗೆ ಉಸಿರು ಚೆಲ್ಲಿ ನಡೆದು ಬಿಡುವ ಅಂದಾಜಿಗೂ ಸಿಗದ ಅಲೆಮಾರಿ.

ದಟ್ಟ ಕಾಡಿನ ವಾಸನೆ ಎಂಥವರನ್ನೂ ಸಹ ಧ್ಯಾನಸ್ಥ ಸ್ಥಿತಿಗೆ ಒಯ್ದುಬಿಡುತ್ತದೆ! ಸಣ್ಣಗೆ ಹಸಿರೊಳಗೆ ಹುರುಪು ಹೊತ್ತು ಹೊರಟರೆ ತಣ್ಣಗೆ ಬರಮಾಡಿಕೊಳ್ಳುತ್ತದೆ. ಈ ನಿರ್ಜನ ಕಾಡು, ದಖ್ಖನ್ ಪ್ರಸ್ಥಭೂಮಿಯ ಜೀವಗಳು, ಕಲ್ಲರಮನೆ ಘಾಟ್ ನ ತಿರುವುಗಳ ತಿರುವಿ ಒಳಹೊಕ್ಕರೆ ಮೈ ಮೆಲ್ಲಗೆ ಅರಳುತ್ತದೆ. ಎಡವಿಬಿದ್ದಷ್ಟು ಜಲಝುರಿಗಳು ಎಡಬಲಕ್ಕೆ ಬಸಿದು ಕುಸಿದು ಕಾಲಿಗೆ ಒರಗಿ ತಣ್ಣಗೆ ಬೆರಳಿಗೆ ತಾಗಿ ಸಾಗುತ್ತವೆ!

ವೈಜ್ಞಾನಿಕವಾಗಿ ಇತಿಹಾಸದ ಪುಟಗಳನ್ನು ತಿರುವಿದಷ್ಟು ಮತ್ತು ಅದರ ಬಗ್ಗೆ ಇನ್ನಷ್ಟು ಮೊಗೆದಷ್ಟು, ಅರಿಯಲೆತ್ನಿಸಿದಷ್ಟು, ಮನುಷ್ಯ ಮಾತ್ರ ತನ್ನ ಜೀವದ ಜೀವನವನ್ನು ಇಂಥವೇ ನೀರಿನ ಮೂಲಗಳ ಆಕರಗಳನ್ನು ಅರಸಿ ಹೊರಟದ್ದು ದಾಖಲಾಗಿದೆ! ಅಲೆಯುತ್ತಲೆ ಈ ಜೀವಗಳು ನದಿಗಳ ತಟದಲ್ಲಿ ಬದುಕು ಪಳಗಿಸಿಕೊಳ್ಳುತ್ತಾ, ಬೀಡು ಬಿಟ್ಟು ಬದುಕುವುದು ಕಲಿತವು! ಆದರೆ ಆ ಅಲೆಮಾರಿತನದ ಸುಖ ಈಗೀಗ ಈ ಯುಗದ ಯುವಪೀಳಿಗೆಯೂ ಬಯಸುತ್ತಿದೆ!


© ಅರವಿಂದ ರಂಗನಾಥ

ಒಂದು ಧೀರ್ಘ ತುಂತುರು ಜಡಿ ಮಳೆಯೊಳಗೆ ಮೈಲುಗಟ್ಟಲೆ ನಡೆಯಬೇಕೆನಿಸುತ್ತದೆ. ಅದ್ಯಾವುದೋ ಕಾಡಿನ ಒಳಮೈ ಹೊಕ್ಕರೆ, ಈ ಮೈ ಸೊಕ್ಕು ಇಳಿಯುವಷ್ಟರಲ್ಲೆ ಆ ಕಾಡಿನ ನೆತ್ತಿಯ ಮುಟ್ಟಿ ಅಲ್ಲೊಂದು ಸಣ್ಣ ಟೆಂಟ್ ಹಾಕಿ, ಇಳಿ ಸಂಜೆ ಸೂರ್ಯ ಮಲೆಗಳ ತುತ್ತ ತುದಿಗೆ ಚುಂಬಿಸಿ ಶಿಖರಗಳ ಮೈಸವರಿ ಹಸಿರಿನೊಳಗೆ ಮೈ ಹುದುಗಿಸಿಕೊಂಡು ಮಲಗುವುದನ್ನು ನೋಡಬೇಕೆನಿಸುತ್ತದೆ!

ಬೆಳದಿಂಗಳ ಕಾಡು ಭಯಂಕರ ನಿಗೂಢತೆಯನ್ನು ಬಿಚ್ಚಿಕೊಳ್ಳುತ್ತಾ, ಒಂದೊಂದೆ ರಹಸ್ಯವನ್ನು ಪೂರ್ಣ ಚಂದ್ರನೆಡೆಗೆ ಎಸೆಯುತ್ತಾ ಧ್ವನಿಸುತ್ತದೆ! ಹರಿವ ನದಿಯ ನಾದದ ಝುಳು ಝುಳು ಪ್ರತಿಧ್ವನಿಸುತ್ತಾ ಕಾಡು ಹೊಕ್ಕು ಅನಂತ ತರಂಗಗಳ ತಬ್ಬಿ ಸುಖಿಸುತ್ತದೆ! ಮತ್ಯಾವುದೊ ಬೇರು ಇಡೀ ದಿನ ಬಸಿದಿಟ್ಟ ನೀರನ್ನು ಮಟ್ಟಸ ಭೂಮಿಗೆ ಮುಟ್ಟಿಸಿ ತಟ್ಟಿಸಿ ತಳ್ಳುತ್ತದೆ! ಭಯಂಕರ ಸೌಂದರ್ಯವೊಂದು ನೆತ್ತಿಯ ಬಯಲೊಳಗೆ ಬೆತ್ತಲೆ ಚಂದ್ರನ ರೂಪದಲ್ಲಿ ಗೋಚರಿಸುವಾಗ, ನಾನಾ ಬಗೆಯ ತಳಿಯ ಕಪ್ಪೆಗಳು, ಇನ್ನೇನು ತಮ್ಮ ಗಂಟಲು ಹರಿದೇ ಹೋಗಿಬಿಡುತ್ತದೆ ಅನ್ನುವಷ್ಟು ಜೋರಾಗಿ ಕೂಗುತ್ತವೆ! ಶರಂಪರ ಮಳೆಯೊಂದು ಇಂತಹ ಇರುಳುಗಳ ಜೊತೆಗೂಡಿದರೆ, ಬೆಚ್ಚಗೆ ಅಂತ ಜೊತೆಗಿರುವುದು ನಮ್ಮ ಈ ಉಸಿರೊಂದೆ ಅನ್ನಿಸಿಬಿಡುತ್ತದೆ! ಅವಿನಾಶಿನಿ ಈ ಪ್ರಕೃತಿಯೊಳಗೆ ನಾವು ಬಂದು ಹೋಗುವವರಷ್ಟೆ, ದಕ್ಕಿದಷ್ಟು ಅನುಭವವನ್ನು ಎದೆಯುಡಿಯೊಳಗೆ ಬಾಚಿಕೊಳ್ಳಬೇಕಿರುವುದು ಈ ಅಲೆಮಾರಿ ಬದುಕಿನ ತುರ್ತು!

ಮಳೆ ನೀರಿಂಗಿದ ಹೊಂಗೆಯ ಮರದ ಕೆಳಗೆ, ನೆಲದಂಗಳ ಹಸಿ ಮಣ್ಣು ಕೆಸರ ಕಣ, ಕಣದೊಳಗಿಂದ ಕಂಪಿನ ಕಡೆ ಹೊರಟ ಹೆಜ್ಜೆಯ ಜಾಡು ಅಳಿಸಲೆಂದೆ ಸಣ್ಣಗೆ ಸುರಿವ ಸೋನೆಮಳೆಗೆ ನಖಶಿಖಾಂತನೆಂದು ನಡೆಯುತಿರುವಾಗ, ಸಳಸಳ ಬೆವರು ಮೈಯೊಳಗಿಂದ ತಣ್ಣಗೆ ಮಳೆಹನಿಯೊಡಗೂಡಿ ಮಣ್ಣಿನ ಮಡಿಲಿಗೆ ಮುಟ್ಟುತ್ತಿತ್ತು!




ಮಳೆಯೂರ ರಾಡಿಯೊಳಗರಳಿದ ಹೂಗಾಲ ಮಾಸಕೆ ಹಸಿ ಹಡೆದ ಹಡೆದವ್ವರು ಈ ಬಾಣಂತಿ ಮೋಡಗಳ ಮುಸುಕು ಸಾಲು ಸಾಲುಗಳು! ಎಲ್ಲಿಂದಲೊ ಏರಿ ಮತ್ತೆಲ್ಲೊ ಸೇರಿ ಅಲ್ಲಿಂದ ಆಚೀಚೆ ಜಾರಿ ಮೈಗೆ ಮೈ ತೀಡಿ ಬೆಳಕ ಕಿಡಿಯೊಂದು ಸಳಕ್ ಅಂತ ಮೈನಡು ಒಳಗಿಂದ ಹೊಳೆಸಿ, ನಡುಮೈ ಝಾಡಿಸಿ, ಹನಿ ಸ್ಖಲಿಸಿ, ಹಗುರಾಗಿ, ಮಣ್ಣು ಮೈ ಮೆತ್ತಗೆ ತಬ್ಬಿ ಹಸಿಗೊಳಿಸಿ ಹದ ಮಾಡಿ ಹೊಸ ತಳಿಗೆ ಕದ ತೆಗೆದು ಬರಮಾಡಿಕೊಳ್ಳುವಾಗ, ವಸಂತದ ಹೊಸ್ತಿಲಿಗೆ ಎಡವಿ ಬೀಳುವ ಖಯಾಲಿ ನನ್ನದು!

ಮೈ ಹರವಿದಷ್ಟು ನವಿರು ಬಟ್ಟೆಯ ನಿಮಿರಿಸಿ ನಿಲ್ಲುವಂತೆ, ಚೂಪು ಚಳಿಯಾಕೆ ಕಿವಿ ಕದ ಬಿಚ್ಚಿ, ಒಳಹೊಕ್ಕು, ನಡುಗಿಸಿ ಗುಡುಗುವಾಗ, ತುಂಡು ಬಿಸಿ ಗಾಳಿ ಎದೆಯ ಪುಪ್ಪುಸದಿಂದ ಕಾಲ್ಕಿತ್ತುತ್ತದೆ!




ಕಡಲ ಸಾನಿಧ್ಯ ಸೆರಗಿನುದ್ದಕ್ಕೂ ಅಂಟಿದ ಕರಾವಳಿಯ ಒಳಮೈ ಸಹ್ಯಾದ್ರಿಗಳ ತಪ್ಪಲಿನ ಎಲೆಗಳೆದೆಗಳಿಗೆ ರಾಚುವ ಮಳೆಯ ಹನಿಗಳು ಹೊರಡಿಸುವ ಸದ್ದಿದೆಯಲ್ಲಾ, ಅದೊಂಥರಾ ಎಂದಿಗೂ ಬೇಸರವಾಗದ ಹೃದಯ ಬಡಿತದ ಸಂಗೀತವಿದ್ದಂತನಿಸಿ ಮತ್ತೆ ಮತ್ತೆ ಈ ಮನಸಿನೊಳಗೆ ಮಲೆಯೊಳಗಿನ ಮಳೆಯ ಧ್ವನಿಯೆ ಮಾರ್ದನಿಸಿತ್ತದೆ! ಅಲ್ಲೊಂದು ಸುಶ್ರಾವ್ಯ ನಾದವಿದೆ. ಏರಿಳಿತದ ಹಿಡಿತವಿದೆ. ಅಸಂಖ್ಯಾತ ವೃಷ್ಟಿಶರಗಳು ಒಟ್ಟಿಗೆ ಎಲೆ ಎದೆ ತಟ್ಟಿ ತೊಟ್ಟಿಕ್ಕುವ ಆತುರದ ವಾತಾವರಣವಿದೆ! ಕಪ್ಪು ಮೋಡಗಳೆಲ್ಲಾ ಮುಸುಕಿದಂತೆ, ಈ ಕಾಡು, ಕತ್ತಲೆಗೆ ಮೈಚೆಲ್ಲುತ್ತದೆ. ಆಗಷ್ಟೆ ತಾಸೆರಡು ತಾಸಿಗೊಮ್ಮೆ ಸುರಿವ ಸೋನೆಗೆ ನೀರುಂಡ ದಟ್ಟ ಕಾನನದ ಒಳ ನಟ್ಟನಡುವಿಂದ ಮೆಟ್ಟಿ ನಡೆವ ದಾರಿಗುಂಟ ತುಂಟ ಹಸಿತನದ ಸುಗಂಧ ಒಂದು ಜೊತೆಯಾಗುತ್ತದೆ!

ನಡೆದಷ್ಟು ಕಸುವು ದಕ್ಕಿಸುವಲ್ಲಿ ಈ ಸಾಂದ್ರತೆಯನ್ನೆಲ್ಲಾ ಬಸಿದಿಟ್ಟುಕೊಂಡ ಕಾನನ ಮುಖ್ಯ ಪಾತ್ರವಹಿಸುತ್ತದೆ. ಶೀತಲಗೊಂಡ ಮಟ್ಟಸ ಭೂಮಿಯ ಕಾಡು ಒಳಸೆಳೆದರೆ ಸಾಕು ಸಣ್ಣಗೆ ನಶೆ ಏರಿದಂತೆ ತನ್ನ ಮೈಗೇರಿಸಿಕೊಂಡು ತೇಲಾಡಿಸುತ್ತದೆ! ಕೊಳೆತ ಕಟ್ಟಿಗೆಯಲ್ಲೂ ಜಗತ್ತಿನ ಅತ್ಯುತ್ತಮ ಜೀವಂತ ಚಿತ್ರಗಳಲ್ಲೊಂದೆನ್ನುವಷ್ಟು ಮೈಮನಸಿಗಿಳಿದು ಅಚ್ಚಳಿಯದೆ ಎದೆಯಲುಳಿದುಬಿಡುತ್ತದೆ! ಸಣ್ಣಗೆ ಹರಿವ ಝರಿಗೆ ಸುಖಾಸುಮ್ಮನೆ ಎಡವಿ ಬೀಳಬೇಕೆನಿಸುವಷ್ಟು ನಾಜೂಕುತನ ಒಳಗೊಳಗೆ ಜಾಗೃತಗೊಳ್ಳುತ್ತದೆ. ಇಡೀ ಕಾಡ ನಡುಹೊಕ್ಕಷ್ಟು ಭಯಂಕರವಾಗಿ ಸೌಂದರ್ಯವನ್ನೆಲ್ಲಾ ಎದೆಗೆ ಬಸಿದು ಕೊಟ್ಟು ಹಿಗ್ಗಿಸಿ ಮುನ್ನುಗ್ಗಿಸುತ್ತದೆ! ಹಸಿಕಾಡ ತರೆಗೆಲೆಗಳ ಕೆಳ ಮೃದು ಮಣ್ಣೊಳಗಿನ ಜಿಗಣೆ ಕೈಕಾಲಿಗಂಟಿ ಗುಟುಕಿಸಿದಷ್ಟು ರಕುತ ಹೊಸದಾಗಿ ಸೃಷ್ಟಿಗೊಳ್ಳುತ್ತದೆ! ನಿಂತಲ್ಲಿ ನಿಲ್ಲಲು ಬಿಡದೆ ಮತ್ತೆಲ್ಲಿಗೊ ತಲುಪಲೂ ಸಹ ಹೆಣಗಾಡಿಸುವಂತೆ ಸುಖ ಸುರಿವ ಅತೀವ ಸುಖಸಂಕಟವನು ಈ ಹಸಿ ತಪ್ಪಲಿನ ಕಾಡುಗಳು ಕೊಡುತ್ತವೆ! ಅಲೆದಷ್ಟು ಅಲೆಮಾರಿತನವನ್ನೆ ಕೊಡುವ ಬದುಕಿಗೆ ಬದುಕುವುದು ಕಲಿಸುವ ಈ ಅಲೆದಾಟ ಅನಂತವಾದದ್ದು!



© ಶಶಿಧರಸ್ವಾಮಿ ಆರ್. ಹಿರೇಮಠ

# ಬ್ರೆಟ್ಟಸ್ ನೆಗೆಯುವ ಜೇಡ

ಮಾವಿನ ಮರದ ಎಲೆಯ ಮೇಲೆ ಸಣ್ಣ ಜೀವಿಯೊಂದು ನಡೆದಾಡುವುದು ಗೋಚರಿಸಿದಾಗ ತಕ್ಷಣವೇ ಕ್ಯಾಮರವನ್ನು ಅದರತ್ತ ಗುರಿಮಾಡಿ ಮ್ಯಾಕ್ರೋ ಲೆನ್ಸ್ ನಲ್ಲಿ ನೋಡಿದೆ, ಅದು ಜೇಡವಾಗಿತ್ತು. ಜೇಡವು ಬಲು ಚುರುಕಾಗಿದ್ದು ಅಲ್ಲಿಂದ ನೆಗೆದು ಕೆಳಗಿನ ಎಲೆಯ ಮೇಲೆ ಕುಳಿತುಕೊಂಡಿತು. ನಾನು ಅದರ ಫೋಟೋಗ್ರಫಿ ಮಾಡತೊಡಗಿದೆ. ಅದು ಕ್ಯಾಮರದ ಲೆನ್ಸ್ ಅನ್ನು ತನ್ನ ಹೊಳಪಿನ ಕಣ್ಣಿನಿಂದ ದಿಟ್ಟಿಸಿ ನೋಡಿದಾಗ ನನ್ನ ಕೈ ಬೆರಳಿನಿಂದ ಕ್ಯಾಮರಾದ ಶಟರ್ (ಕವಾಟ ವೇಗದ) ಬಟನ್ ಅನ್ನು ಒತ್ತಿ ನಾಲ್ಕು ಫೋಟೋಗಳನ್ನು ಕ್ಲಿಕ್ಕಿಸಿದೆ.

ಈ ಜೇಡವು 'ಬ್ರೆಟ್ಟಸ್ ಜಿಗಿಯುವ' (Brettus Jumping Spider) ಹೆಣ್ಣು ಜೇಡವಾಗಿದ್ದು, ಇವನ್ನು ಆಂಗ್ಲ ಭಾಷೆಯಲ್ಲಿ ಜಂಪಿಂಗ್ ಸ್ಪೈಡರ್ (Jumping Spiders) ಗಳೆಂದು ಕರೆದು, ವೈಜ್ಞಾನಿಕವಾಗಿ ಬ್ರೆಟ್ಟಸ್ (Brettus) ಕುಲಕ್ಕೆ ಸೇರಿಸಲಾಗಿದೆ. ಇವನ್ನು ಸಂಧಿಪದಿ (ಆರ್ಥ್ರೋಪೋಡಾ- Arthropoda) ಗಳ, ಅರಾಕ್ನಿಡಾ (Arachnida) ವರ್ಗದ, ಅರನೀ (Araneae) ಗಣದ, ಸಾಲ್ಟಿಸಿಡೇ (Salticidae) ಕುಟುಂಬಕ್ಕೆ ಸೇರಿಸಲಾಗಿದೆ. ಇವುಗಳಲ್ಲಿ ಆರು ಪ್ರಭೇದಗಳು ದಕ್ಷಿಣ ಏಷ್ಯಾದ ಭಾರತದಿಂದ ಚೀನಾ ಮತ್ತು ಸುಲವೇಸಿವರೆಗೆ ಕಂಡುಬರುತ್ತವೆ. ಮಡಗಾಸ್ಕರ್‌ಯಲ್ಲಿ ಸ್ಥಳೀಯವಾಗಿ ಒಂದು ಪ್ರಭೇದವಿದೆ. ಬ್ರೆಟ್ಟಸ್ ಸಿಂಗುಲಾಟಸ್ (Brettus cingulatus) ಮತ್ತು ಬ್ರೆಟ್ಟಸ್ ಅಡೋನಿಸ್ (Brettus adonis) ನೆಗೆಯುವ ಜೇಡಗಳು ಇತರ ಜೇಡಗಳನ್ನು ಆಹಾರವಾಗಿ ಭಕ್ಷಣೆ ಮಾಡುತ್ತವೆ.




ಬ್ರೆಟ್ಟಸ್ ನೆಗೆಯುವ ಜೇಡಗಳು ನೋಡಲು ಸುಂದರ ಹಾಗೂ ಆಕರ್ಷಕವಾಗಿವೆ. ಹೆಣ್ಣು ಜೇಡವು 6-7 ಮಿ.ಮೀ. ಇದ್ದು, ಗಂಡು ಜೇಡವು ಹೆಣ್ಣಿಗಿಂತ ಚಿಕ್ಕದಾಗಿ 4-5 ಮಿ.ಮೀ. ಗಾತ್ರದಲ್ಲಿವೆ. ಉದ್ದನೆಯ ಶಿರೋವಕ್ಷವು ಮಧ್ಯದಲ್ಲಿ ಕೆಂಪಾಗಿದೆ. ಹಿಂಭಾಗವು ದುಂಡಾಗಿದೆ. ಪಾರ್ಶ್ವ ಬದಿಗಳಲ್ಲಿ ದಪ್ಪನಾಗಿ ವಕ್ರವಾಗಿರುವ ಬಿಳಿ ಪಟ್ಟಿಗಳಿವೆ. ಕಿಬ್ಬೊಟ್ಟೆ ಕಿರಿದಾಗಿದ್ದು, ಶಿರೋವಕ್ಷಗಿಂತ ಚಿಕ್ಕದಾಗಿದೆ. ಗೋಳಾಕಾರವಾದ ಕಿಬ್ಬೊಟ್ಟೆಯಲ್ಲಿ ಕೆಂಪು ಬಣ್ಣದ ದಪ್ಪ ಅಂಡಾಕಾರದ ಗುರುತಿದೆ. ಅಂಡಾಕಾರದ ಗುರುತಿನಲ್ಲಿ ಎರಡು ಹಳದಿ ಬಣ್ಣದ ಬಿರುಗೂದಲುಗಳು ವೃತ್ತಾಕಾರದಿಂದ ಕೂಡಿವೆ. ಹಳದಿ ಬಣ್ಣದ ತೇಪೆಯ ನಂತರ ಇಡೀ ದೇಹವು ಲೋಹದ ಬಣ್ಣದಿಂದ ಕೂಡಿದೆ. ಹೆಣ್ಣುಗಳಲ್ಲಿ ಶಿರೋವಕ್ಷವು ಕಂದು ಕಿತ್ತಳೆ ಬಣ್ಣವಾಗಿದ್ದು, ಪಾರ್ಶ್ವ ಬದಿಗಳಲ್ಲಿ ಬಿಳಿ ಪಟ್ಟಿಯನ್ನು ಹೊಂದಿವೆ. ನಾಲ್ಕು ಸಾಲುಗಳಲ್ಲಿ ಜೋಡಿಸಲ್ಪಟ್ಟ ಎಂಟು ಕಣ್ಣುಗಳಿದ್ದು, ಮುಂಭಾಗದ ಎರಡು ಕಣ್ಣುಗಳು ದೊಡ್ಡವಾಗಿವೆ. ಹಿಂಭಾಗದ ಹಾಗೂ ಮಧ್ಯದ ಕಣ್ಣುಗಳು ತುಂಬಾ ಸಣ್ಣದಾಗಿವೆ. ಚಾಕ್ಷುಷ (ನೇತ್ರದ-ಒಕ್ಯುಲರ್) ಪ್ರದೇಶವು ಚಿಕ್ಕದಾಗಿ ಕೂದಲುಗಳಿಂದ ಆವೃತವಾಗಿದೆ. ಉದ್ದವಾದ ಎಂಟು ಕಾಲುಗಳಿದ್ದು, ಮುಂದಿನ ಜೋಡಿ ಕಾಲುಗಳು ಮಂಡಿಚಿಪ್ಪು ಮತ್ತು ಸಂಧುಗಳು ಕೂದಲುಗಳ ಅಂಚುಗಳಿಂದ ಮುಚ್ಚಲ್ಪಟ್ಟು, ತೀಕ್ಷ್ಣವಾದ ಮುಳ್ಳುಗಳಿಂದ ಆವೃತವಾಗಿವೆ. ಕಾಲುಗಳು ಏಡಿಯಂತೆ ನಡೆದಾಡಲು ಸಹಾಯಕವಾಗಿವೆ. ನಾಲ್ಕನೇ ಜೋಡಿ ಕಾಲುಗಳು ಮೇಲ್ಮುಖವಾಗಿ ನೆಲೆಗೊಂಡಿವೆ.




ಈ ಜೇಡಗಳು ಮೋಹಕವಾಗಿ ನೃತ್ಯ ಪ್ರದರ್ಶನವನ್ನು ಮಾಡುತ್ತದೆ. ಹೆಣ್ಣು ಜೇಡಗಳು ಮೊಟ್ಟೆಗಳನ್ನು ಬಲೆ ಜಾಲವನ್ನು ನೇಯ್ದಿರುವ ಜಾಳಿಗೆಯಂತಿರುವ ಹಾಳೆಯ ಕೆಳಗೆ ಮುಚ್ಚಿಟ್ಟು ರಕ್ಷಿಸುತ್ತವೆ. ಇವು ತೋಟ, ಉದ್ಯಾನವನ, ಕುರುಚಲು ಕಾಡು, ತೋಪುಗಳ ಸಣ್ಣ ಮರಗಳಲ್ಲಿ ಹಾಗೂ ಎಲೆಗಳ ಮೇಲ್ಮೈಯಲ್ಲಿ ಕಾಣಸಿಗುತ್ತವೆ. ಈ ಜೇಡವು ಇತರೆ ಜೇಡಗಳನ್ನು ಬೇಟೆಯಾಡುತ್ತದೆ. ಬಲೆ ನೇಕಾರ ಜೇಡಗಳನ್ನು ತಿನ್ನಲು ಇಷ್ಟಪಡುತ್ತವೆ. ಅಲ್ಲದೇ ಬಲೆಗಾರ ಜೇಡಗಳನ್ನು ಸೆರೆಹಿಡಿಯಲು, ವಿಶಿಷ್ಟ ಕಾರ್ಯತಂತ್ರವನ್ನು ರೂಪಿಸಿ ಬಲೆಯ ಅಂಚಿನಲ್ಲಿ ನಿಂತು ಅದರ ಹಿಡಿಕೊಂಡಿನೊಂದಿಗೆ ರೇಷ್ಮೆ ತಂತಿಗಳನ್ನು ಕೀಳುವುದು, ಅದು ಪರಿಣಾಮಕಾರಿಯಾಗುವವರೆಗೂ ಹಲವಾರು ಮಾದರಿಯ ಲಯಗಳಿಂದ ಪ್ರಯತ್ನಿಸುತ್ತವೆ. ನಂತರ ಬೇಟೆಯ ಜೇಡವು ಪ್ರಲೋಭನೆಗೆ ಒಳಗಾದಾಗ ಅದನ್ನು ಆಕ್ರಮಣಕಾರಿ ಮಿಮಿಕ್ರಿಯೊಂದಿಗೆ ಇರಿಯುತ್ತ ಸೆರೆಹಿಡಿಯುತ್ತವೆ. ಆದಾಗ್ಯೂ ಬೈಟ್ಸ್ ನೆಗೆಯುವ ಜೇಡವು ನೇಯ್ದ ರೇಷ್ಮೆಗೆ ಬಲೆಗೆ ಅಂಟಿಕೊಳ್ಳುವುದಿಲ್ಲ ಮತ್ತು ಸುಲಭವಾಗಿ ಬಲೆಗಳಲ್ಲಿ ನಡೆಯಬಲ್ಲದು, ಆದರೆ ಸಾಮಾನ್ಯವಾಗಿ ಇತರ ಜೇಡಗಳ ಬೇರೆ ಬಲೆಗಳಿಗೆ ಹೋಗುವುದಿಲ್ಲ. ಈ ಜೇಡವು ಕೀಟಗಳನ್ನು ಸುಲಭವಾಗಿ ಹಿಂಬಾಲಿಸಿ, ವೇಗವಾಗಿ ಸಮೀಪಿಸುತ್ತ, ನಂತರ ನಿಧಾನಗೊಂಡು ಅಂತಿಮವಾಗಿ ಕೀಟವನ್ನು ಸೆರೆಹಿಡಿದು ನಿತ್ರಾಣಗೊಳಿಸಿ ಅದರ ರಸಹಾರವನ್ನು ಹೀರಿ ಸವಿಯುತ್ತವೆ.



ಈ ಬೈಟಸ್ ನೆಗೆಯುವ ಹೆಣ್ಣು ಜೇಡವು ಮಾವಿನ ಎಲೆಯ ತುಂಬೆಲ್ಲ ನಡೆದಾಡುತ್ತಿರುವಾಗ ವಿವಿಧ ಕೋನಗಳಿಂದ ಅದರ ಫೋಟೋಗಳನ್ನು ಕ್ಲಿಕ್ ಮಾಡಿಕೊಂಡೆ. ಪರಿಸರದಲ್ಲಿ ಜೇಡಗಳು ಪ್ರಮುಖವಾಗಿ ಕೀಟ ನಿಯಂತ್ರಕಗಳಾಗಿದ್ದು, ಅವುಗಳ ಆವಾಸ ತಾಣಗಳನ್ನು ಉಳಿಸಿ ಸಂರಕ್ಷಿಸಬೇಕಾಗಿದೆ.








**ಲೇಖನ:** ಶಶಿಧರಸ್ವಾಮಿ ಆರ್. ಹಿರೇಮಠ

**ಹಾವೇರಿ ಜಿಲ್ಲೆ**




# ಎಂಟೆದೆಯ ಭಂಟ ಈ ಎಂಟಡ!

ಸುಮಾರು ಏಳು ವರ್ಷದ ಹಿಂದೆ ವೈಲ್ಡ್‌ಲೈಫ್ ವರ್ಕ್ ಶಾಪ್ ಒಂದರಲ್ಲಿ ಎಂಟಡ (Entada rheedii) ಅನ್ನುವ ಬಳ್ಳಿಯ ಬಗ್ಗೆ ತಿಳಿಯಿತು. ಅದು ನನಗೆ ಪರಿಚಯವಾದ ದಿನದಿಂದ ಇತ್ತೀಚಿನವರೆಗೂ ಎಲ್ಲಿಯೂ ನೋಡಲು ಸಿಕ್ಕಿರಲಿಲ್ಲ. ಅದರ ಬಗೆಗಿನ ಅಚ್ಚರಿ ನನ್ನಲ್ಲಿ ಎಷ್ಟಿತ್ತೆಂದರೆ ಎಂಟಡ ಹೆಸರಿನ ಠಸ್ಸೆ ನನ್ನ ಮನಸಲ್ಲಿ ಮೂಡಿತ್ತು. ಬೇರಾವ ಗಿಡ, ಮರ, ಬಳ್ಳಿಯೂ ನನಗೆ ಇಷ್ಟು ಕುತೂಹಲ ಮೂಡಿಸಿರಲಿಲ್ಲ. ಕ್ಯಾರಮ್ ಬೋರ್ಡ್ ಆಡಲು ಉಪಯೋಗಿಸುವ ಪಾನ್ನಳಿಗಿಂತ ದೊಡ್ಡದಾದ ಈ ಬೀಜವನ್ನು ಕೈಯಲ್ಲಿ ಹಿಡಿದಾಗಿನ ಅಂದಿನ ನನ್ನ ಕುತೂಹಲ ಮತ್ತೆ ನೀಗಿದ್ದು, ಈಚೆಗೆ ಸೌಪರ್ಣಿಕ ನದಿಯ ದಡದಲ್ಲಿ ಉಳಿದುಕೊಂಡಾಗ. ಜಿಟಿ ಜಿಟಿ ಮಳೆಯಲ್ಲಿ ಹಾವು ಕಪ್ಪೆಗಳನ್ನರಸುತ್ತಾ ಒಂದು ಸಣ್ಣ ಚಾರಣಕ್ಕೆಂದು ಟಾರ್ಚ್ ಹಿಡಿದು ನಡೆದವನಿಗೆ, ಸಣ್ಣ ತೊರೆಯ ಪಕ್ಕ ಸಿಕ್ಕಿದ್ದೇ ಈ ಎಂಟಡ ಪ್ರಭೇದದ ಬೀಜ. ಸಿಕ್ಕ ಎರಡನ್ನು ಕಿಸೆಯೊಳಗೇರಿಸಿ ಬಂದು ಕುಟುಂಬಕ್ಕೆಲ್ಲ ತೋರಿಸಿ, ಅದರ ಬಗ್ಗೆ ತಿಳಿದದ್ದನ್ನು ಎಲ್ಲರಿಗೂ ವಿವರಿಸಿದೆ. ನನಗೆ ಸೋಜಿಗವೆನಿಸಿದ್ದು ಹೆಸರಘಟ್ಟದ ಪಕ್ಕದಲ್ಲಿರುವ ಹಳ್ಳಿಯೊಂದರಲ್ಲಿ ತನ್ನ ಬಾಲ್ಯ ಕಳೆದ ನನ್ನ ಅಮ್ಮನಿಗೂ ಇದರ ತಕ್ಕಮಟ್ಟಿನ ಪರಿಚಯವಿದ್ದದ್ದು, ನನ್ನ ಉತ್ಸಾಹಕ್ಕೆ ದನಿಗೂಡಿಸುತ್ತಾ ಈ ಕಾಯಿಯನ್ನು ಕಂಬಿಗೋ ಅಥವಾ ಹಗ್ಗಕ್ಕೋ ಬಿಗಿದು ಜಾನುವಾರುಗಳ ಕುತ್ತಿಗೆಗೆ ಕಟ್ಟುತ್ತಿದ್ದರೆಂದು ನೆನಪು

ಮಾಡಿಕೊಂಡರು. ಇದನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಆನೆಝರಿ ಕ್ಯಾಂಪ್ನ ನಿರ್ವಾಹಕರು ಸಹ ಹೌದೆನ್ನುತ್ತಾ ತಲೆದೂಗಿದರು. ಮಲೆನಾಡಿನ ಜನರು ಇದನ್ನು ಸಾಂಬಾರಿಗಾಗಿ ಬಳಸುತ್ತಾರೆ, ಹಾಗೆಯೇ ದೂರದ ಆಫ್ರಿಕ ಕೆಲ ದೇಶದ ಜನರು ಈ ಬೀಜದಿಂದ ಹುರಿದ ಪುಡಿಯನ್ನು ಕಾಫಿಯ ರೀತಿ ಉಪಯೋಗಿಸುತ್ತಾರೆಂದು ತಿಳಿಸಿಕೊಟ್ಟರು. ಬೆಂಗಳೂರಿಗೆ ಮರಳಿದ ಮೇಲೆ, ಇದರ ವೈಶಿಷ್ಟ್ಯಗಳನ್ನು ಅರಿಯಲು ಪ್ರಾರಂಭಿಸಿದಾಗ ತಿಳಿಯಿತು - ಈ ಬೀಜಗಳನ್ನು ಅಮೇಜ಼ಾನಲ್ಲಿ ಆರಕ್ಕೆ ಮುನ್ನೂರು ರೂಪಾಯಿಯಂತೆ ಮಾರುತ್ತಾರೆಂದು! ಇರಲಿ, ನಾವು ಇದರ ಬಗ್ಗೆ ಮತ್ತಷ್ಟು ತಿಳಿಯುವ ಪ್ರಯತ್ನ ಮಾಡೋಣ ಬನ್ನಿ.




ಎಂಟಡ ಜೀನಸ್ ನಲ್ಲಿ ಸರಿ ಸುಮಾರು 30 ಪ್ರಭೇದಗಳಿವೆ. ಅದರಲ್ಲಿ ಕೆಲವು ಮರಗಳು, ಪೊದೆಗಳು ಮತ್ತು ಬಳ್ಳಿಗಳೂ (Liana) ಇವೆ. ಇವೆಲ್ಲವು ಲೆಗ್ಯುಮಿನೋಸೇ (Leguminosae) ಕುಟುಂಬಕ್ಕೆ ಸೇರುವವು ಮತ್ತು ಪ್ರಪಂಚದ ಹಲವಾರು ಉಷ್ಣವಲಯದ ದೇಶಗಳಲ್ಲಿ ಕಂಡು ಬರುತ್ತವೆ. ನಮಗೆ ಚೆನ್ನಾಗಿ ಪರಿಚಯವಿರುವ ಮತ್ತು ಅಡುಗೆಯಲ್ಲಿ ಬಳಸುವ ಬಟಾಣಿಯಿದೆಯಲ್ಲಾ? ಇದು ಸಹ ಅದೇ ಕುಟುಂಬಕ್ಕೆ ಸೇರಿದ್ದರೂ ಬಟಾಣಿಗಿಂತಲು ಬಹುಶಃ ನೂರು ಪಾಲು ದೊಡ್ಡದಿರುತ್ತದೆ. ಈ ಬಳ್ಳಿ ಬಿಡುವ ಕಾಯಿಗಳು **ಮೂರರಿಂದ ನಾಲ್ಕು** ಅಡಿಗಳವರೆಗೂ ಉದ್ದವಿದ್ದು, ಅದರೊಳಗೆ ಹತ್ತಕ್ಕೂ ಮೇಲಾಗಿ ಬೀಜಗಳಿರುತ್ತವೆ. ಪ್ರತಿಯೊಂದು ಬೀಜವು ಸುಮಾರು **ಮೂರು** ಅಂಗುಲ ವ್ಯಾಸ ಹೊಂದಿರುತ್ತದೆ. ಇದು ಚಪ್ಪಟೆಯಾಗಿ ಡಿಸ್ಕ ಆಕಾರದಲ್ಲಿದ್ದು, ಕಂದು ಬಣ್ಣದ ಮೇಲ್ಮೈ ಬಲು ಗಟ್ಟಿ ಇರುತ್ತದೆ. ಸಾಮಾನ್ಯವಾಗಿ ಇವು ನದಿ, ತೊರೆ ಮತ್ತು ಸಮುದ್ರದಂಚಿನ ಕಾಡಿನಲ್ಲಿ ಕಾಣ ಸಿಗುತ್ತವೆ. ಇದಕ್ಕೆ ಕಾರಣವೆಂದರೆ, ಈ ಆನೆಗಾತ್ರದ ಬೀಜಗಳು ತೇಲುವ (Buoyancy) ಭೌತಿಕ ಸಾಮರ್ಥ್ಯ ಹೊಂದಿವೆ. ಈ ಗಿಡಗಳಲ್ಲಿನ ಮತ್ತೊಂದು ಗಮನಾರ್ಹ ವಿಶೇಷತೆಯೆಂದರೆ, ಎಂಟಡ ಬಳ್ಳಿಯು ಆರ್ಕಿಮಿಡೀಸ್ ಸ್ಕ್ರೂ ಮಾದರಿಯಲ್ಲಿ ತನ್ನ ಆಸುಪಾಸಿನಲ್ಲಿರುವ ಮರಗಳನ್ನು ಅಪ್ಪಿ ಬೆಳೆಯುತ್ತವೆ. ಅಂದರೆ ಗಡಿಯಾರದ ಮುಳ್ಳು ನಡೆಯುವ ವಿರುದ್ಧ ದಿಕ್ಕಿನಲ್ಲಿ ಇದು ಬೆಳೆಯುತ್ತದೆ.




ತಾನು ಬೆಳೆಯಲು ಮತ್ತೊಂದು ಮರದ ಅವಶ್ಯಕತೆಯಿರುವ ಇಂತಹ ಸಣ್ಣ ಬಳ್ಳಿ, ದೈತ್ಯಾಕಾರದ ಕಾಯಿ ಬಿಡುವುದಾದರು ಹೇಗೆ? ಎಂದು ನಮಗೆ ಅನ್ನಿಸದಿರುವುದೇ? ಹೆಚ್ಚಿನ ದ್ಯುತಿಸಂಶ್ಲೇಷಕ/ಬೆಳಕಡುಗೆ (photosynthesis) ದರದ ಕಾರಣದಿಂದಾಗಿ, ಈ ಬಳ್ಳಿಯು ಅತಿ ವೇಗವಾಗಿ ಬೆಳೆಯುತ್ತವಷ್ಟೆ ಅಲ್ಲದೆ ಅತಿಶಯ ಗಾತ್ರದ ಕಾಯಿ ಮತ್ತು ಬೀಜಗಳನ್ನು ಉತ್ಪಾದಿಸುತ್ತವೆ. ಹಿಂದೊಮ್ಮೆ ಎಂಟಡದ ಒಂದು ಪ್ರಭೇದದ ಏಳು ಬೀಜಗಳನ್ನು ಯಲ್ಲಾಪುರದಿಂದ ತಂದು ನಮ್ಮ ಬೆಂಗಳೂರಿನ IISC ಯಲ್ಲಿ ಸಂಶೋಧನೆಗಾಗಿ ನೆಡಲಾಯಿತು; ಆ ಏಳರಲ್ಲಿ **ಒಂದು**, ಬಹುನಿಯಾ ಪರ್ಪರಯಾ (Bauhinia purpurea) ಮರದ ಸಹಾಯ ಪಡೆದುಕೊಂಡು ಬೃಹತ್ತಾಗಿ ತನ್ನ ಮೇಲಾವರಣ ಬೆಳೆಸಿಕೊಂಡಿದೆ. ಆದರೆ 25 ವರ್ಷದ ಅದರ ಆಯಸ್ಸಿನಲ್ಲಿ ಕೇವಲ 5 **ಐದು** ಬಾರಿ ಕಾಯಿ ಬಿಟ್ಟಿದ್ದು, ಪಶ್ಚಿಮ ಘಟ್ಟದಲ್ಲಿ ಕಾಣಸಿಗುವ ಗಾತ್ರ ಇಲ್ಲಿ ಸಾಧ್ಯವಾಗಿಲ್ಲ; ಇದಕ್ಕೆ ಕಾರಣಗಳೇನೆಂದು ಮುಂದಿನ ದಿನಗಳಲ್ಲಿ ಸ್ಪಷ್ಟತೆ ಸಿಗಬಹುದೇನೊ, ಕಾದು ನೋಡೋಣ!

**ಲೇಖನ:** ಭಾನು ಪ್ರಕಾಶ್

**ಬೆಂಗಳೂರು ನಗರ**



ವಿವಿ ಅಂಕಣ

## ಜೇಡದ ನಡಿಗೆಯ ಜಾಡುಹಿಡಿದು...

ಇತ್ತೀಚೆಗಷ್ಟೇ ತೆರೆಕಂಡ 'ಸ್ಪೈಡರ್ ಮ್ಯಾನ್; ನೋ ವೇ ಹೋಮ್' ಚಿತ್ರ ಭರ್ಜರಿಯ ಯಶಸ್ಸು ಗಳಿಸಿತು. ಚಿತ್ರದಲ್ಲಿನ ಸಾಹಸ ದೃಶ್ಯಗಳು ಮತ್ತು ಹಾಸ್ಯ ನೆನೆಯುವಂತದ್ದು. ಸಾಹಸ ದೃಶ್ಯಗಳಲ್ಲಿ ಅವರ ನಟನೆ, ಗಾಳಿಯಲ್ಲಿ ಜಿಗಿಯುವುದು, ಗೋಡೆಯ ಮೇಲೆ ನಿಜ ಜೇಡದಂತೆ ತೆವಳುವುದು ಇವೆಲ್ಲಾ ವಾಸ್ತವವಲ್ಲದಿದ್ದರೂ ನೋಡಲು ಮಾತ್ರ ಚೆನ್ನಾಗಿತ್ತು. ಆಹ್... ನಿಜ ಜೇಡದಂತೆ ಗೋಡೆಯ ಮೇಲೆ ನಡೆಯುವುದು ನಮಗೆ ಸಾಧ್ಯವಿಲ್ಲ ಎಂದೆನಾ? ಹಾಗಾದರೆ ನನ್ನ ಮಾತನ್ನು ಹಿಂದೆ ತೆಗೆದುಕೊಳ್ಳುತ್ತೇನೆ. ಯಾಕೆಂದರೆ ನೀವೂ ಜೇಡದಂತೆ ಗೋಡೆಗಳ ಮೇಲೆ ನಡೆಯಬಹುದು. ನಿಜವಾಗಿಯೂ, ನಂಬಲಾಗುತ್ತಿಲ್ಲ ಅಲ್ಲವೇ. ಹಾಗಾದರೆ ಈ ಸಂಶೋಧನೆಯನ್ನು ನಿಮಗೆ ಹೇಳಲೇ ಬೇಕು. ಈ ಸಂಶೋಧನೆಯ ವಿಷಯವಸ್ತು ಜೇಡಗಳು ಲಂಬಕೋನದ ಗೋಡೆಗಳ ಮೇಲೆ ಅಥವಾ ಛಾವಣಿ ಮೇಲೆ ಉಲ್ಟಾ ನಡೆದಾಡುವ ವಿಧಾನ ಮತ್ತು ಕಾರಣವನ್ನು ವಿಸ್ತರಿಸುತ್ತದೆ. ಅದೇ ವಿಧಾನ ಬಳಸಿ ನಾವೂ ಸ್ಪೈಡರ್ ಮ್ಯಾನ್ ನಂತೆ ಗೋಡೆಯ ಮೇಲೆ ನಡೆಯಬಹುದು.



ಎಷ್ಟೋ ಕೀಟಗಳು ಮರ ಗಿಡಗಳನ್ನು ಹತ್ತುತ್ತವೆ. ಆದರೆ ಜೇಡ ಇಲ್ಲಿ ಕೀಟಗಳು ನಡೆದಾಡುವುದು ಅಸಾಧ್ಯ ಎಂಬ ಸ್ಥಳಗಳಲ್ಲೂ ಸಹ ಲೀಲಾ ಜಾಲವಾಗಿ ನಡೆದಾಡುತ್ತಿರುತ್ತವೆ. ಜೇಡಗಳು ಹೇಗೆ ಬಹುತೇಕ ಮೇಲ್ಮೈಗಳಲ್ಲಿ ಅಷ್ಟು ಸಲೀಸಾಗಿ ನಡೆದಾಡುತ್ತವೆ ಎಂಬುದನ್ನು ತಿಳಿಯಲು ಯಾವ ಸಂಶೋಧಕರೂ ಅಷ್ಟಾಗಿ ಪ್ರಯತ್ನಿಸಿರಲಿಲ್ಲ ಎನ್ನುತ್ತಾರೆ ಕ್ಲೀಮೆನ್ಸ್, ಜರ್ಮನಿಯ ಕೀಲ್ ವಿಶ್ವವಿದ್ಯಾಲಯದ ಪ್ರಾಣಿಶಾಸ್ತ್ರಜ್ಞ. ಜೇಡಗಳ ಈ ಪ್ರತಿಭೆಗೆ ಕಾರಣ ಜೇಡಗಳ ಕಾಲಿನಲ್ಲಿರುವ ಸಣ್ಣ ಸಣ್ಣ ಕೂದಲುಗಳು. ಹೌದು, ಜೇಡಗಳ ಕಾಲುಗಳಲ್ಲಿ ಯಾವುದೇ ತರಹದ ದ್ರವ ರೂಪದ ಅಂಟು ಇರುವುದಿಲ್ಲ. ಬದಲಿಗೆ ಅವು ಒಣ ಅಂಟುವಿಕೆಯನ್ನು (dry adhesion) ಹೊಂದಿವೆ. ಅದರಿಂದಲೇ ಜೇಡಗಳು ಬಹುತೇಕ ಮೇಲ್ಮೈಗಳ ಮೇಲೆ ಅಷ್ಟು ನಿರಾಯಾಸವಾಗಿ ಓಡಾಡುವುದು. ಇದಕ್ಕೆ ಮುಖ್ಯ ಕಾರಣ ಅವುಗಳ ಕಾಲುಗಳಲ್ಲಿರುವ ನಾರಿನ ಹಾಗೆ ಕಾಣುವ ಸಣ್ಣ ಸಣ್ಣ ಕೂದಲುಗಳಿಂದ (A ಮತ್ತು B). ಹಾಗು ಆ ಕೂದಲುಗಳು ನಾವು ರಸಾಯನಶಾಸ್ತ್ರದ ಪ್ರಯೋಗಗಳಲ್ಲಿ ಬಳಸುವ 'ಸ್ಪಾಚುಲಾ' ತರಹದ ರಚನೆ ಹೊಂದಿದೆ. ಅದಕ್ಕೆ ಆ ಕೂದಲುಗಳನ್ನು 'ಸ್ಪಾಚುಲೆ' ಎಂದು ಕರೆಯಲಾಗಿದೆ. ಹೀಗಾಗಿ ಈ ವಿಶೇಷ ಕೂದಲುಗಳು ಯಾವುದಾದರು ಮೇಲ್ಮೈನ ಸಂಪರ್ಕಕ್ಕೆ ಬಂದರೆ, ಅದರಲ್ಲಿರುವ ಅಣುಗಳ ಜೊತೆಗೆ ಬಂಧ (bond) ಬೆಸೆದು ಆ ಮೇಲ್ಮೈಗೆ ಅಂಟಿಕೊಳ್ಳುತ್ತವೆ.






ಈ ಹೊಸ ಸಂಶೋಧನೆಯ ಮುಂಚೆಯೇ ಕ್ಲೀಮೆನ್ಸ್ ಗೆ ಜೇಡಗಳು ತನ್ನ ಕಾಲಿನ ಕೂದಲುಗಳ ಸಹಾಯದಿಂದ ಜೇಡಗಳು ಗೋಡೆಯ ಮೇಲೆ ಓಡಾಡಲು ಅಥವಾ ಅಂಟಿಕೊಳ್ಳಲು ಉಪಯೋಗವಾಗುತ್ತದೆ ಎಂದು ತಿಳಿದಿದ್ದರು. ಆದರೆ ಅದು ಅಷ್ಟು ಚೆನ್ನಾಗಿ ಹೇಗೆ ಕೆಲಸಮಾಡುತ್ತದೆ ಎಂದು ತಿಳಿಯಬೇಕಿತ್ತು. ಇದಕ್ಕಾಗಿ ಕ್ಲೀಮೆನ್ಸ್ ಮತ್ತು ಸಹೋದ್ಯೋಗಿಗಳು ದಕ್ಷಿಣ ಅಮೇರಿಕಾದಲ್ಲಿ ಸಿಗುವ 'ತಿರುಗುವ ಹುಲಿ ಜೇಡ (tiger wandering spider)' ಎಂಬ ಬಗೆಯ ಜೇಡವನ್ನು ಅಧ್ಯಯನಕ್ಕೆ ತೆಗೆದುಕೊಂಡರು. ಜೇಡದ ಕಾಲುಗಳಲ್ಲಿನ ಕೂದಲನ್ನು ಎಳೆಯಲು ಪ್ರಯತ್ನಿಸಿದರು. ಎಳೆದಾಗ ಒಂದು ಕೂದಲ ಬದಲಿಗೆ ಇಡೀ ಕಾಲೆ ಕಿತ್ತು ಬಂತು. ಓಹ್... ಇದೇನಿದು! ಎಂದು ಆಶ್ಚರ್ಯ ಪಡಬೇಡಿ. ಇದು ಜೇಡವು ತನ್ನ ಭಕ್ಷಕರಿಂದ ತಪ್ಪಿಸಿಕೊಳ್ಳುವ ಒಂದು ಸಾಮಾನ್ಯ ಉಪಾಯ. ಇದಾದ ನಂತರ ಸಂಶೋಧಕರು ಒಂದು ಶಕ್ತಿಯುತವಾದ ಸೂಕ್ಷ್ಮದರ್ಶಕವನ್ನು ಬಳಸಿ ಜೇಡದ ಕಾಲಿನ ಕೂದಲ ಎಳೆಯನ್ನು ಸೂಕ್ಷ್ಮವಾಗಿ ಗಮನಿಸಿದರು. ಮೊದಲಿಗೆ ಕ್ಲೀಮೆನ್ಸ್, ಕೂದಲಿನ ಎಳೆಗಳು ಒಂದೇ ದಿಕ್ಕಿನಲ್ಲಿ ತಿರುಗಿರುತ್ತವೆ ಎಂದು ಭಾವಿಸಿದ್ದರು. ಆದರೆ ಅವರ ಆಶ್ಚರ್ಯಕ್ಕೆ ಕೂದಲಿನ ಎಳೆಗಳು ಒಂದೇ ದಿಕ್ಕಿನ ಬದಲಿಗೆ ಬಹುತೇಕ ಎಲ್ಲಾ ದಿಕ್ಕುಗಳಲ್ಲಿ ತಿರುಗಿದ್ದವು. ಇದಾದ ತಕ್ಷಣ ಕ್ಲೀಮೆನ್ಸ್ ಆ ಕೂದಲೆಳೆಗಳ ಅಂಟುವಿಕೆಯ ಬಲವನ್ನು ಗಾಜಿನ ಮೇಲ್ಮೈ ಕೂಡಾ ಸೇರಿದಂತೆ ಎಲ್ಲಾ ತರಹದ ಮೇಲ್ಮೈಗಳ ಮೇಲೆ ಪರೀಕ್ಷಿಸಿದರು. ಕೆಲವು

ಕೂದಲುಗಳು ಒಂದು ದಿಕ್ಕು ಅಥವಾ ಕೋನದಲ್ಲಿ ಹೆಚ್ಚು ಅಂಟಿನ ಬಲವನ್ನು ತೋರಿದರೆ, ಉಳಿದವು ಬೇರೆ ಬೇರೆ ಕೋನಗಳಲ್ಲಿ ತನ್ನ ಅಂಟಿನ ಬಲವನ್ನು ತೋರುತ್ತಿದ್ದವು. ಇದನ್ನು ಕೇಳಿದಾಗ ನಮಗೇ ಅನಿಸುವ ಹಾಗೆ, ಜೇಡ ಯಾವ ಮೇಲ್ಮೈ ಮೇಲಾದರೂ ಕಾಲಿಡಲಿ ಅಥವಾ ಯಾವ ಕೋನದಲ್ಲಾದರೂ ಕಾಲಿಡಲಿ ಸಲೀಸಾಗಿ ನಿಲ್ಲಬಹುದು ಹಾಗು ಓಡಾಟ ನಡೆಸಬಹುದು ಎಂದು. ಇದೇ ಮಾತನ್ನು ಉತ್ತರ ಕ್ಯಾರೋಲಿನಾದ ಜೀವಶಾಸ್ತ್ರಜ್ಞ ತಮ್ಮ ಮಾತುಗಳಲ್ಲಿ ಹೇಳುತ್ತಾರೆ... 'ಹಲವಾರು ಕೂದಲುಗಳು ವಿವಿಧ ದಿಕ್ಕಿನಲ್ಲಿ ತಿರುಗಿರುವುದು ಜೇಡಕ್ಕೆ ಎಲ್ಲಾ ಮೇಲ್ಮೈ ಮೇಲೆ ನಿರಾಯಾಸವಾಗಿ ಅಂಟಿಕೊಳ್ಳುವ ಗುಣವನ್ನು ನೀಡುತ್ತದೆ' ಎಂದು.


© Wandering Tiger Spider c.SERGIO AMITI_GETTY

'ಈ ಸಂಶೋಧನೆ ಗಮನ ಸೆಳೆಯುವ ಹಾಗಿದೆ' ಎಂದು ಸೇರಿಸುತ್ತಾರೆ ಆಲಿ ಧಿನೋಜ್ವಾಲ. ಇವರು ಓಹಿಯೋದ ಒಂದು ವಿಶ್ವವಿದ್ಯಾಲಯದ ವಸ್ತು ವಿಜ್ಞಾನಿ. 'ಈ ಸಂಶೋಧನೆ ಹೊಸ ತರಹದ ಅಂಟು ಪದಾರ್ಥಗಳನ್ನು ಅಭಿವೃದ್ಧಿಗೊಳಿಸಲು ಪೂರಕವಾಗಿದೆ. ಉದಾಹರಣೆಗೆ ಹೊಸ ಬಗೆಯ ಅಂಟು ಟೇಪನ್ನು ಸೃಷ್ಟಿಸುವಲ್ಲಿ ಈ ಸಂಶೋಧನೆ ನೆರವಾಗಬಹುದು. ಜೊತೆಗೆ ಇಂತಹ ಸಂಶೋಧನೆಗಳು ನಮಗೆ ಕಷ್ಟವೆನಿಸುವ ಕೆಲಸಗಳನ್ನು ಪ್ರಕೃತಿ ಎಷ್ಟು ಸಲೀಸಾಗಿ ಮತ್ತು ಸಮರ್ಥವಾಗಿ ಮಾಡುತ್ತದೆ ಎಂಬ ವಿಷಯವನ್ನು ರುಜುವಾತು ಮಾಡುತ್ತದೆ.' ಇದನ್ನು ಇನ್ನೊಂದು ಹೆಜ್ಜೆ ಮುಂದೆ


© ಜೈಕುಮಾರ್ ಆರ್.

ತೆಗೆದುಕೊಂಡು ಹೋದ ಕ್ಲೀಮೆನ್ಸ್ ಮತ್ತು ಸಹೋದ್ಯೋಗಿಗಳು ಜೇಡದ ಕಾಲಿನ ಕೂದಲುಗಳನ್ನು ಮನುಷ್ಯ ಧರಿಸುವ ಕೈ ಚೀಲಕ್ಕೆ (hand gloves) ವಿವಿಧ ಕೋನಗಳಲ್ಲಿ ಅಳವಡಿಸಿದರು. ಹೀಗೆ ಅಳವಡಿಸಿದ ಕೈ ಚೀಲ ಒಬ್ಬ ವ್ಯಕ್ತಿಯ ತೂಕವನ್ನು ತಡೆಯುವ ಮಟ್ಟಿಗೆ ಬಲವಾಗಿ ಗೋಡೆಯನ್ನು ಹಿಡಿದಿತ್ತು. ಇದರ ಅರ್ಥ ಇಂತಹ ಕೈ ಚೀಲಗಳನ್ನು ಧರಿಸಿ ನಾವೂ ಸಹ ಸಿನೆಮಾದಲ್ಲಿ ತೋರುವ ಸ್ಪೈಡರ್ ಮ್ಯಾನ್ ನಂತೆ ನಿಜವಾಗಿಯೂ ಗೋಡೆಗಳ ಮೇಲೆ ನಡೆಯುವ ಮಹಾಶಕ್ತಿ ಬಂದಂತೆ.

ನೋಡಿದರಾ... ಎಲ್ಲೋ ಮನೆಯ ಮೂಲೆಯಲ್ಲಿ ತನ್ನ ಗೂಡು ಕಟ್ಟಿ ನಾನಿಲ್ಲಿ ಇಲ್ಲವೇ ಇಲ್ಲ ಅನ್ನೋ ರೀತಿಯಲ್ಲಿ ಬದುಕುವ ಜೇಡದ ಕಾಲಿನಲ್ಲೇ ಇಂತಹ ಮಹಾಶಕ್ತಿ ಅಡಗಿದೆ. ಹಾಗೆ ನೋಡಿದರೆ ಪ್ರತಿಯೊಂದು ಜೀವಿಯೂ ಜೀವ ವಿಕಾಸದಲ್ಲಿ ನಮಗಿಂತ ಮೊದಲು ಬಂದು ಲಕ್ಷಾಂತರ ವರ್ಷಗಳು ಬದುಕಿ ಈ ದಿನದವರೆಗೆ ನಮಗೆ ನೋಡಲು ಸಿಗುತ್ತಿವೆಯೆಂದರೆ, ಪ್ರಕೃತಿ ಮಾತೆಯ ಸಹಾಯದಿಂದ ಎಲ್ಲವೂ ಯಾವುದೋ ಒಂದು ಮಹಾಶಕ್ತಿಯನ್ನು ಹೊಂದಿವೆ ಎಂದೇ ಅರ್ಥ. ಅಂತಹ ಅತೀವ ಶಕ್ತಿ ಹೊಂದಿರುವ ಪ್ರತೀ ಜೀವಿಯನ್ನು ಹಾಗೂ ಅದನ್ನು ದಯಪಾಲಿಸಿದ ನಿಸರ್ಗ ಮಾತೆಯ ಶಕ್ತಿಯನ್ನು ಗೌರವಿಸಿ, ನಮ್ಮ ಬದುಕಿನ ಪ್ರತೀ ಹೆಜ್ಜೆಯನ್ನು ಎಚ್ಚರದಿಂದ ಇಡಲು ಶುರುಮಾಡೋಣ.



**ಮೂಲ ಲೇಖನ:** ScienceNewsforStudents



**ಲೇಖನ:** **ಜೈಕುಮಾರ್ ಆರ್.**
**ಡಬ್ಲ್ಯೂ. ಸಿ. ಜಿ. ಬೆಂಗಳೂರು ಜಿಲ್ಲೆ**

# ಆನಂದಡವಿ

ರವಿ ಶಶಿ ಭೂಮಿಯ ಕಾಂತದಿಂದ
ಅಗ್ನಿ ವಾಯು ವರುಣನ ಕೃಪೆಯಿಂದ
ಸರ್ವ ಭೂತಗಣ ರೂಪದಿಂದ
ಋತುಚಕ್ರ ಸುಯೋಗ ಮಹಾಯೋಗದಿಂದ
ಫಲಪುಷ್ಪ ವೃಕ್ಷ ಕಾಶಿಯಿಂದ
ವೀರ ಪರಾಕ್ರಮ ಶ್ವೇತಮೌನಗಳಿಂದ
ಖಗ ಮೃಗ ಜೀವಜಂತುಗಳಿಂದ
ಬೀಜ ತತ್ತಿ ದೃಷ್ಠಿ ಕೋನ ವ್ಯಾಸಗಳಿಂದ
ದೈತ್ಯ ಉತ್ತಮ ಕನಿಷ್ಠಗಳಿಂದ
ಝರಿ ತೊರೆ ಮೇಘದಾಕೃತಿಗಳಿಂದ
ಗಿರಿ ಶಿಖರ ಕಣಿವೆಗಳಿಂದ
ಬಹುರೂಪ ವಿವಿಧ ಬಗೆ ವಿನ್ಯಾಸಗಳಿಂದ
ಆನಂದಡವಿಯ ಅನಾವರಣ
ಆನಂದಡವಿಯಲಿ.......!

- ಕೃಷ್ಣ ನಾಯಕ್
ರಾಮನಗರ ಜಿಲ್ಲೆ

# ಪ್ರಕೃತಿ ಬಿಂಬ



**ನೀಲಿಗಂಟಲ ಚಟಕ** © **ದೀಪಕ್ ಎಲ್. ಎಂ.**

ಯುರೋಪ್ ಹಾಗು ದಕ್ಷಿಣ ಅಲಾಸ್ಕಾದಲ್ಲಿ ನೆಲೆಸಿರುವ ಈ ಹಕ್ಕಿಗಳನ್ನು ಚಳಿಗಾಲದಲ್ಲಿ ಉತ್ತರ ಆಫ್ರಿಕಾ ಹಾಗು ಭಾರತದಲ್ಲಿ ಕಾಣಬಹುದು. ಇವು ಯುರೋಪಿನಿಂದ ಭಾರತಕ್ಕೆ ಬರುವ ಚಳಿಗಾಲದ ವಲಸೆಗಾರ ಹಕ್ಕಿ. ಈ ಹಕ್ಕಿಗಳು ಗಂಟಲಿನ ಬಣ್ಣ ಆಕರ್ಷಕವಾದ ನೀಲಿ ಬಣ್ಣವಾಗಿದೆ. ಆದ್ದರಿಂದಲೇ ಇದನ್ನು 'ನೀಲಿಗಂಟಲ ಚಟಕ' ಎಂದು ಕರೆಯುತ್ತಾರೆ. ಈ ನೀಲಿಗಂಟಲ ಚಟಕ ಗಾತ್ರದಲ್ಲಿ ಯುರೋಪಿಯನ್ ರಾಬಿನ್ ಪಕ್ಷಿಯನ್ನು ಹೋಲುತ್ತದೆ. ಸಾದಾ ಕಂದು ಮೈಬಣ್ಣವನ್ನು ಹಾಗು ಬದಿಯಲ್ಲಿ ಕೆಂಪು ತೇಪೆಗಳನ್ನು ಮತ್ತು ವಿಶಿಷ್ಟವಾದ ಕಪ್ಪು ಬಾಲವನ್ನು ಹೊಂದಿದ್ದು, ಹೆಣ್ಣು ಹಕ್ಕಿಗಳು ಗಂಡು ಹಕ್ಕಿಗಳಿಗಿಂತ ಮಂಕಾದ ಮೈಬಣ್ಣವನ್ನು ಹೊಂದಿರುತ್ತವೆ. ಇದು ಹುಳ ಹುಪ್ಪಟೆಗಳನ್ನು ಹಿಡಿದು ತಿನ್ನುವ ಪಕ್ಷಿಯಾಗಿದೆ. ಗಂಡು ಹಕ್ಕಿ ವೈವಿಧ್ಯಮಯ ಮತ್ತು ಅನುಕರಿಸುವ ಹಾಡನ್ನು ಹೊಂದಿದೆ.



**ನೆಲಗುಬ್ಬಿ** © **ದೀಪಕ್ ಎಲ್. ಎಂ.**

ಗಂಡು ಗುಬ್ಬಚ್ಚಿಯನ್ನು ಹೋಲುವ ನೆಲಗುಬ್ಬಿಗಳು ದಕ್ಷಿಣ ಹಿಮಾಲಯದಿಂದ ಶ್ರೀಲಂಕಾದವರೆಗೆ ಹಾಗೂ ಪೂರ್ವದ ಅಸ್ಸಾಂಮ್ನಲ್ಲಿ ಕಂಡುಬರುತ್ತವೆ. ಇವನ್ನು ಹೆಚ್ಚಾಗಿ ಕಾಡು, ನದಿತೀರದ ಮರಳು ಪ್ರದೇಶಗಳಲ್ಲಿ ಕಾಣಬಹುದು. ನೆಲ ಗಂಡು ಗುಬ್ಬಿಗೆ ಗಂಡು ಗುಬ್ಬಚ್ಚಿಗಳಿಗಿರುವಂತೆ ಕಣ್ಣಿನ ಸುತ್ತ ಕಪ್ಪು ವೃತ್ತವಿದ್ದು, ಮೊಂಡು ಕೊಕ್ಕು, ಕುಳ್ಳ ಕಾಲು, ಬೂದು ಬಣ್ಣದ ತಲೆಯನ್ನು ಹೊಂದಿದೆ. ಹೆಣ್ಣು ನೆಲ ಗುಬ್ಬಿಗಳು ತಿಳಿ ಕಂದು ಬಣ್ಣವನ್ನು ಹೊಂದಿದ್ದು, ಕಣ್ಣಿನ ಸುತ್ತ ಕಪ್ಪು ಪಟ್ಟಿಯಿರುವುದಿಲ್ಲ. ಗಂಡು ನೆಲಗುಬ್ಬಿಗಳು ಒಂದು ವಿಶೇಷ ನಡವಳಿಕೆಯನ್ನು ತೋರುತ್ತವೆ. ಅದೇನೆಂದರೆ, ಇವು ಕೆಳಗಿನಿಂದ ರಾಕೇಟಿನಂತೆ ನೇರವಾಗಿ ಟ್ವೀ ಎಂದು ಸಿಳ್ಳೆ ಹಾಕುತ್ತಾ ಮೇಲೆ ಆಕಾಶಕ್ಕೇರಿ, ಇನ್ನೇನು ನೆಲಮುಟ್ಟುತ್ತದೆ ಎನ್ನುವಷ್ಟರಲ್ಲಿ ಮತ್ತೆ ನಭಕ್ಕೆ ಹಾರುತ್ತವೆ. ಆದ್ದರಿಂದ ಈ ಹಕ್ಕಿಗಳಿಗೆ ಸಿಳ್ಳೆಗುಬ್ಬಿ ಎಂತಲೂ ಕರೆಯುವುದುಂಟು.

ಕೀಟಗಳನ್ನು ಮತ್ತು ಹುಲ್ಲಿನ ಬೀಜಗಳನ್ನು ತಿನ್ನುವ ಈ ಹಕ್ಕಿಗಳು ಸಣ್ಣ ಗುಂಪುಗಳಲ್ಲಿ ಅಥವಾ ಜೋಡಿಯಾಗಿ ಕಂಡುಬರುತ್ತವೆ. ಚಳಿಗಾಲದಲ್ಲಿ ದೊಡ್ಡ ಹಿಂಡುಗಳನ್ನು ರೂಪಿಸಿಕೊಳ್ಳುತ್ತವೆ. ಈ ನೆಲಗುಬ್ಬಿಗಳು ಬೇಸಿಗೆಯಲ್ಲಿ ಸಂತಾನೋತ್ಪತ್ತಿ ಮಾಡುತ್ತವೆ. ಸಾಮಾನ್ಯವಾಗಿ ಎರಡರಿಂದ ಮೂರು ಮೊಟ್ಟೆಗಳನ್ನಿಡುವ ಈ ಹಕ್ಕಿಗಳು ನೆಲದಲ್ಲಿ ಗುಳಿ ಮಾಡಿ ಅದರ ಸುತ್ತಲೂ ಕಲ್ಲುಗಳನ್ನಿಟ್ಟು ಗೂಡು ಕಟ್ಟುತ್ತವೆ. ಗಂಡು ಹಾಗು ಹೆಣ್ಣು ಹಕ್ಕಿಗಳೆರಡೂ ಮೊಟ್ಟೆಗಳಿಗೆ ಕಾವು ಕೊಡುತ್ತವೆ. 13 ರಿಂದ 14 ದಿನಗಳಲ್ಲಿ ಮೊಟ್ಟೆಯೊಡೆದು ಮರಿಗಳು ಹೊರಬರುತ್ತವೆ. ಗಂಡು ಹಾಗು ಹೆಣ್ಣು ಪಕ್ಷಿಗಳೆರಡೂ ಪುಟ್ಟ ಹಕ್ಕಿಗಳ ಆರೈಕೆ ಮಾಡುತ್ತವೆ.



**ಗುಡುಗಾಡು ಹಕ್ಕಿ** **© ದೀಪಕ್ ಎಲ್. ಎಂ.**

ಭಾರತದ ನಿವಾಸಿಯಾಗಿರುವ ಈ ಹಕ್ಕಿಗಳು ಉಷ್ಣವಲಯದ ಏಷ್ಯಾದಿಂದ ದಕ್ಷಿಣ ಚೈನಾದಾದ್ಯಂತ ಮತ್ತು ಇಂಡೋನೇಷ್ಯಾ, ಫಿಲ್ಲಿಪೈನ್ಸ್ ದೇಶಗಳಲ್ಲಿ ಕಂಡುಬರುತ್ತವೆ. ಮೈಯ ಮೇಲ್ಭಾಗ ಗಾಢವಾದ ಕಂದು ಬಣ್ಣವನ್ನು, ಕೆಳಭಾಗ ತುಕ್ಕು ಕಂದು ಬಣ್ಣವನ್ನು, ಗಲ್ಲ, ಗಂಟಲು ಮತ್ತು ಎದೆಯ ಭಾಗದಲ್ಲಿ ಕಡುಕಪ್ಪು ಬಣ್ಣವನ್ನು ಹೊಂದಿದೆ. ಗಂಡು ಪಕ್ಷಿಗಳಿಗಿಂತ ಹೆಣ್ಣು ಪಕ್ಷಿಗಳು ಗಾತ್ರದಲ್ಲಿ ದೊಡ್ಡದಾಗಿದ್ದು, ಆಕರ್ಷಕವಾದ ಮೈಬಣ್ಣದಿಂದ ಕೂಡಿರುತ್ತವೆ. ಈ ಪಕ್ಷಿಯ ಕೂಗು ಮೋಟಾರು ಸೈಕಲ್ಲಿನಂತಹ ಡರ್-ರ್-ರ್-ರ್ ಎಂಬುವ ಶಬ್ದ ಅಥವಾ ಹೂನ್-ಹೂನ್ ಎಂಬುವ ದೊಡ್ಡ ಶಬ್ದದಂತೆ ಕೇಳುತ್ತದೆ.

ಗಂಡು ಹಕ್ಕಿಗಳಿಗಿಂತ ಹೆಣ್ಣು ಹಕ್ಕಿಗಳು ಹೆಚ್ಚು ಶಕ್ತಿಶಾಲಿ ಮತ್ತು ಅವುಗಳೇ ಗೂಡು ಕಟ್ಟುತ್ತವೆ. ವರ್ಷದಾದ್ಯಂತ ಸಂತಾನೋತ್ಪತ್ತಿ ಮಾಡುವ ಸಾಮರ್ಥ್ಯವನ್ನು ಹೊಂದಿವೆ. ಹೆಣ್ಣು ಹಕ್ಕಿಗಳು ಮೊಟ್ಟೆಗಳನ್ನಿಟ್ಟಾಗ ಗಂಡು ಪಕ್ಷಿಗಳು ಕಾವು ನೀಡುತ್ತವೆ ಹಾಗು ಹುಟ್ಟಿದ ತಕ್ಷಣವೇ ಓಡಾಡುವ ಸಾಮರ್ಥ್ಯವನ್ನು ಹೊಂದಿರುವ ಸಣ್ಣ ಮರಿ ಹಕ್ಕಿಗಳ ಆರೈಕೆಯನ್ನೂ ಮಾಡುತ್ತವೆ. ಮೂರರಿಂದ ನಾಲ್ಕು ಮೊಟ್ಟೆಗಳನ್ನಿಡುವ ಈ ಹಕ್ಕಿಗಳ ಮೊಟ್ಟೆಯ ಬಣ್ಣ ಬೂದಿ ಮಿಶ್ರಿತ ಬಿಳಿ ಬಣ್ಣವಾಗಿದ್ದು, ಕೆಂಪು ಮಿಶ್ರಿತ ಕಪ್ಪು ಅಥವಾ ಕಪ್ಪು ಮಿಶ್ರಿತ ನೇರಳೆ ಬಣ್ಣದ ಮಚ್ಚೆಗಳನ್ನು ಹೊಂದಿರುತ್ತವೆ



ಕೊಲ್ಲಾರ್ಡ್ ಪ್ರತಿಂಕೋಲ್ © ದೀಪಕ್ ಎಲ್. ಎಂ.

ಈ ಹಕ್ಕಿ ಸಾಮಾನ್ಯವಾಗಿ ಯುರೋಪಿನ ಬೆಚ್ಚಗಿನ ಭಾಗಗಳು, ನೈರುತ್ಯ ಏಷ್ಯಾ ಮತ್ತು ಆಫ್ರಿಕಾದಲ್ಲಿ ಕಂಡು ಬರುತ್ತವೆ. ಈ ಹಕ್ಕಿ ಭಾರತಕ್ಕೆ ಚಳಿಗಾಲದಲ್ಲಿ ಬರುತ್ತವೆ. ಇವುಗಳನ್ನು ಸಂಜೆಯ ಹೊತ್ತಿಗೆ ನೀರಿರುವ ಪ್ರದೇಶಗಳಲ್ಲಿ ಹುಳಗಳನ್ನು ಹುಡುಕುತ್ತಿರುವುದನ್ನು ಕಾಣಬಹುದು. ಈ ಪಕ್ಷಿಯ ಮೈಬಣ್ಣ ಬೂದಿ ಮಿಶ್ರಿತ ಕಂದು, ಹೊಟ್ಟೆಯ ಭಾಗ ಬಿಳಿ ಹಾಗು ರೆಕ್ಕೆಗಳು ಕಂದುಬಣ್ಣ. ಸಣ್ಣ ಕೊಕ್ಕಿನ ತಳಭಾಗದಲ್ಲಿ ಕೆಂಪು ಬಣ್ಣವನ್ನು ಹೊಂದಿದೆ. ಉದ್ದನೆಯ ಕವಲೊಡೆದ ಬಾಲ, ಸಣ್ಣ ಕಾಲುಗಳು, ಬಹಳ ಉದ್ದನೆಯ ಚೂಪಾದ ರೆಕ್ಕೆಯನ್ನು ಹೊಂದಿರುವ ಇವು ಹಾರುವಾಗಲೇ ತನ್ನ ಆಹಾರವನ್ನು ಸೇವಿಸುತ್ತವೆ. ಆಕಾಶದಲ್ಲಿ ಮುಂದಕ್ಕೆ ಹಿಂದಕ್ಕೆ ಹಾರುತ್ತ ಗಾಳಿಯಲ್ಲಿರುವ ಕೀಟಗಳನ್ನು ಹಿಡಿದು ಸೇವಿಸುತ್ತವೆ. ಇವು ನೆಲದ ಮೇಲೆ ಎರಡರಿಂದ ನಾಲ್ಕು ಮೊಟ್ಟೆಗಳನ್ನಿಡುತ್ತವೆ.

ಚಿತ್ರ: ದೀಪಕ್ ಎಲ್. ಎಂ.

ಲೇಖನ: ಶಾಂಭವಿ ಎನ್.

# ನೀವೂ ಕಾನನಕ್ಕೆ ಬರೆಯಬಹುದು



ಹಲವಾರು ಮರಗಳು ತಮ್ಮೆಲ್ಲಾ ಎಲೆಗಳನ್ನು ಉದುರಿಸಿಕೊಂಡು ಬೋಡಾಗಿ ನಿಲ್ಲುವುದು ಚಳಿಗಾಲದಲ್ಲಿ. ಈ ಚಳಿಗಾಲವು ಭಾರತದಲ್ಲಿ ಡಿಸೆಂಬರ್ ತಿಂಗಳಲ್ಲಿ ಪ್ರಾರಂಭವಾಗಿ ಫೆಬ್ರವರಿಯಲ್ಲಿ ಕೊನೆಗೊಳ್ಳುತ್ತದೆ. ಚಳಿಗಾಲವನ್ನು ಬೇರೆ ಬೇರೆ ದೇಶದಲ್ಲಿ ವರ್ಷದಲ್ಲಿನ ವಿಭಿನ್ನ ಕಾಲಘಟ್ಟದಲ್ಲಿ ಕಾಣಬಹುದು. ಇನ್ನು ಭೂಮಿಯ ಧೃವ ಪ್ರದೇಶವನ್ನು ವಿಶೇಷವಾಗಿ ಗಮನಿಸುವುದೇ ಆದರೆ ಅಲ್ಲಿ ಅತಿಯಾದ ಚಳಿ ಹಾಗು ಹಿಮಗಡ್ಡೆಗಳಿಂದ ಕೂಡಿರುವುದನ್ನು ಕಾಣಬಹುದು. ಇಂತಹ ತೀವ್ರ ಸ್ಥಿತಿಗಳಲ್ಲೂ ಪ್ರಾಣಿಗಳು ತಮ್ಮ ಬದುಕು ಸಾಗಿಸುವುದು ಸೋಜಿಗವೇ ಸರಿ. ಅಂತಹ ಜೀವಿಗಳಲ್ಲಿ ಹಿಮಕರಡಿಯೂ ಸಹ ಒಂದಾಗಿದೆ. ಸುಮಾರು 30 ವರ್ಷಗಳ ಕಾಲ ಜೀವಿಸುವ ಹಿಮಕರಡಿಯು ಅತ್ಯುತ್ತಮವಾಗಿ ಈಜಬಲ್ಲದು ಹಾಗೂ ದೂರದಲ್ಲಿರುವ ತನ್ನ ಬೇಟೆಯನ್ನು ವಾಸನೆಯ ಮೂಲಕ ಗ್ರಹಿಸಬಲ್ಲದು. ಇವುಗಳ ಮೈ ಮೇಲಿನ ದಟ್ಟ ಕೂದಲು ಹಾಗೂ ದಪ್ಪ ಚರ್ಮ ಜೊತೆಗೆ ದೇಹದಲಿರುವ ಕೊಬ್ಬಿನ ಪದರವು ಈ ಜೀವಿಗಳನ್ನು ಎಂತಹ ಚಳಿ ಬಂದರು ರಕ್ಷಿಸುತ್ತವೆ. ಈ ಜೀವಿಯ ಸಂಖ್ಯೆ ಕ್ಷೀಣಿಸುತ್ತಿರುವುದು ಶೋಚನೀಯ. ಹಿಮಕರಡಿಯು U.S. ಅಳಿವಿನಂಚಿನಲ್ಲಿರುವ ಜೀವಿಗಳ ಕಾಯಿದೆಯಡಿಯಲ್ಲಿ (U.S. Endangered Species Act) ಪಟ್ಟಿ ಮಾಡಲಾದ ಮೊದಲ ಕಶೇರುಕ ಪ್ರಾಣಿಯಾಗಿದೆ. ಪ್ರತಿ ವರ್ಷ ಫೆಬ್ರುವರಿ 27 ರಂದು "ವಿಶ್ವ ಹಿಮ ಕರಡಿಯ ದಿನ" ವೆಂದು ಆಚರಿಸಲಾಗುತ್ತದೆ. ಹಿಮಕರಡಿ ಹಾಗೂ ಅದರಂತೆ ಚಳಿಗೆ ತಮ್ಮ ದೇಹವನ್ನು ಮಾರ್ಪಡಿಸಿಕೊಳ್ಳುವ ಪ್ರಾಣಿಗಳ ಬಗ್ಗೆ ನೀವು ಕಾನನಕ್ಕೆ ಬರೆಯಬಹುದು.

ಈ ರೀತಿಯ ಪರಿಸರದ ಬಗೆಗಿನ ಮಾಹಿತಿಯನ್ನು ಒದಗಿಸಲು ಇರುವ ಕಾನನ ಇ-ಮಾಸಿಕಕ್ಕೆ ಮುಂದಿನ ತಿಂಗಳ ಸಂಚಿಕೆಗೆ ಲೇಖನಗಳನ್ನು ಆಹ್ವಾನಿಸಲಾಗಿದೆ. ಆಸಕ್ತರು ಪರಿಸರಕ್ಕೆ ಸಂಬಂಧಿಸಿದ ಕಥೆ, ಕವನ, ಛಾಯಾಚಿತ್ರ, ಚಿತ್ರಕಲೆ, ಪ್ರವಾಸ ಕಥನಗಳನ್ನು ಕಾನನ ಮಾಸಿಕದ ಇ-ಮೇಲ್ ವಿಳಾಸಕ್ಕೆ ಕಳುಹಿಸಬಹುದು.

**ಕಾನನ ಪತ್ರಿಕೆಯ ಇ-ಮೇಲ್ ವಿಳಾಸ**: kaanana.mag@gmail.com
**ಅಂಚೆ ವಿಳಾಸ**:

Study House,

ಕಾಳೇಶ್ವರಿ ಗ್ರಾಮ,

ಆನೇಕಲ್ ತಾಲ್ಲೂಕು,

ಬೆಂಗಳೂರು ನಗರ ಜಿಲ್ಲೆ,

ಪಿನ್ ಕೋಡ್ : 560083. ಗೆ ಕಳಿಸಿಕೊಡಬಹುದು.